# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮)<br>Bengaluru, Thursday, August 18, 2016 (Shravana 27, Shaka Varsha 1938) | ಸಂಚಿಕೆ ೩೩<br>Issue 33 |
|---|---|---|


## ಭಾಗ ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು ಹಾಗೂ ಕರ್ನಾಟಕ ಉಚ್ಛ ನ್ಯಾಯಾಲಯವು ಮಾಡಿದ ನಿಯಮಗಳು

### ಸಮಾಜ್ಯ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಸಕಇ:199:ಎಸ್‌ಎಲ್‌ಪಿ:2016, ಬೆಂಗಳೂರು, ದಿನಾಂಕ: 19–05–2016.**

ಡಾ:ಬಾಬು ಜಗಜೀವನ ರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮ ನಿಯಮಿತದ Memorandum of Articles & Articles of Association ನ ನಿಯಮ 8(a) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಮಕೃಷ್ಣ ಬಿ.ಇ. ತುಮಕೂರು, ಇವರನ್ನು ಡಾ:ಬಾಬು ಜಗಜೀವನ ರಾಂ ಚರ್ಮ ಕೈಗಾರಿಕಾ ಅಭಿವೃದ್ಧಿ ನಿಗಮದ ಮಂಡಳಿಯ ನಿರ್ದೇಶಕರನ್ನಾಗಿ ಹಾಗೂ ನಿಯಮ 13ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಂಡಳಿಯ ಅಧ್ಯಕ್ಷರನ್ನಾಗಿ ನೇಮಿಸಲಾಗಿದ್ದ ಅವಧಿಯನ್ನು ದಿನಾಂಕ:24/08/2016ರ ವರೆಗೆ ಅಥವಾ ಅದಕ್ಕೂ ಮೊದಲೇ ಇವುಗಳಲ್ಲಿ ಯಾವುದು ಮೊದಲು ಅಲ್ಲಿಯವರೆಗೆ ವಿಸ್ತರಿಸಿ ಆದೇಶಿಸಿದೆ.

PR-506

SC-100

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಗಿರಿಜಮ್ಮ,**

ಸರ್ಕಾರದ ಅಧೀನ ಕಾರ್ಯದರ್ಶಿ–1,

ಸಮಾಜ ಕಲ್ಯಾಣ ಇಲಾಖೆ.

### ಜಲ ಸಂಪನ್ಮೂಲ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ಜಸಂಇ 60 ಎಂಟಿಪಿ 2015, ಬೆಂಗಳೂರು, ದಿನಾಂಕ: 04–06–2016.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಕಲಂ 4(ಎ) ಅಡಿಯಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಪಿಡಬ್ಲ್ಯೂಡಿ 381 ಆಕೋ–3/06, ದಿನಾಂಕ:10.11.2006ರಲ್ಲಿ ನೀಡಿರುವ ಸ್ಪಷ್ಟೀಕರಣದ ಅನ್ವಯ, ನಂ.6, ಕಾಲುವೆ ವಿಭಾಗ, ಬಳ್ಳಾರಿ ಇದರ ವ್ಯಾಪ್ತಿಯಲ್ಲಿ, ತುಂಗಭದ್ರಾ ಬಲದಂಡೆ ಮೇಲ್ಮಟ್ಟದ ಕಾಲುವೆಯ ಕಿ.ಮೀ. 11.230ರ ಬಲಭಾಗದ ಏರಿಯು (Embankment) ಕೊಚ್ಚಿ ಹೋಗಿದ್ದರಿಂದ ಹಾಗೂ ಅದೇ ದಿನ ಸುರಿದ ಮಳೆಯಿಂದಾಗಿ, ಕಿ.ಮೀ.2.660ರ ಪೈಕಿ ಅಕ್ವಡಕ್ಟ್ ಕೆಳಭಾಗದಲ್ಲಿರುವ Hard Passage, ನೀರಿನ ರಭಸಕ್ಕೆ ಕಿತ್ತು ಹೋಗಿ, ತಿರುಗಾಡಲು ಅಸಾಧ್ಯವಾಗಿದ್ದರಿಂದ, ಸದರಿ ಹಾನಿಗೊಳಗಾದ ಕಾಲುವೆ ಮತ್ತು Hard Passageನ ದುರಸ್ಥಿ ಕಾಮಗಾರಿಯನ್ನು **"ತುರ್ತು ಕಾಮಗಾರಿ"** ಎಂದು ಘೋಷಿಸಿ, ಇದನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, '1999ರ ಸೆಕ್ಷನ್ 4(ಎ) ಅಡಿಯಲ್ಲಿ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿದೆ.

PR-507

SC-25

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ. ಶ್ರೀನಿವಾಸುಲು,**

ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ–1),

ಜಲ ಸಂಪನ್ಮೂಲ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 17 ಎಂಟಿಪಿ 2016, ಬೆಂಗಳೂರು, ದಿನಾಂಕ: 19-05-2016.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಕಲಂ 4(ಎ) ಅಡಿಯಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಪಿಡಬ್ಲ್ಯೂಡಿ 381 ಆಕೋ-3/06, ದಿನಾಂಕ:10.11.2006ರಲ್ಲಿ ನೀಡಿರುವ ಸ್ಪಷ್ಟೀಕರಣದ ಅನ್ವಯ, ನಂ.1, ತುಂಗಭ್ರದಾ ಜಲಾಶಯ ವಿಭಾಗ, ಮುನಿರಾಬಾದ್ ಇದರ ವ್ಯಾಪ್ತಿಯಲ್ಲಿ, ತುಂಗಭದ್ರಾ ಎಡದಂಡೆ ಮೇಲ್ಮಟ್ಟದ ಕಾಲುವೆಯ ಕಿ.ಮೀ.2.60ರ ಅಕ್ವಡಕ್ಟ್ ಹತ್ತಿರ ಬಲದಂಡೆ ಏರಿಯಾದಲ್ಲಿ ಬೋಂಗಾ ಬಿದ್ದು, ಬಲಗಡೆಯ ಸಿ.ಸಿ.ಲೈನಿಂಗ್ ಒಳಗಡೆಯಿಂದ ನೀರು ಕೊಚ್ಚಿಹೋಗಿದ್ದರಿಂದ, ಸದರಿ ಹಾಳಾದ ಭಾಗದ ದುರಸ್ಥಿಯನ್ನು ತುರ್ತಾಗಿ ಕೈಗೊಂಡು, ಬೋಂಗಾ ಮುಚ್ಚದೇ ಇದ್ದಲ್ಲಿ, ಕಾಲುವೆ ಪೂರ್ಣವಾಗಿ ಒಡೆದು ಹೋಗುವ ಸಂಭವವಿದ್ದರಿಂದ, ಸದರಿ ದುರಸ್ಥಿ ಕಾಮಗಾರಿಯನ್ನು **"ತುರ್ತು ಕಾಮಗಾರಿ"** ಎಂದು ಘೋಷಿಸಿ, ಇದನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಸೆಕ್ಷನ್ 4(ಎ) ಅಡಿಯಲ್ಲಿ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿದೆ.

**PR-508**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಶ್ರೀನಿವಾಸುಲು,**
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 03 ಎಂಟಿಪಿ 2016, ಬೆಂಗಳೂರು, ದಿನಾಂಕ: 19-05-2016.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಕಲಂ 4(ಎ) ಅಡಿಯಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಪಿಡಬ್ಲ್ಯೂಡಿ 381 ಆಕೋ-3/06, ದಿನಾಂಕ:10.11.2006ರಲ್ಲಿ ನೀಡಿರುವ ಸ್ಪಷ್ಟೀಕರಣದ ಅನ್ವಯ, ನಂ.1, ತುಂಗಭ್ರದಾ ಜಲಾಶಯ ವಿಭಾಗ, ಮುನಿರಾಬಾದ್ ಇದರ ವ್ಯಾಪ್ತಿಯಲ್ಲಿ, ದಿನಾಂಕ:23.10.2015ರಂದು ಸುರಿದ ಮಳೆಯಿಂದಾಗಿ, ತುಂಗಭದ್ರಾ ಎಡದಂಡೆ ಮೇಲ್ಮಟ್ಟದ ಕಾಲುವೆಯ ಕಿ.ಮೀ.4.30ರಲ್ಲಿ ಪ್ರಾಣಿಗಳಿಂದ ಅಗೆಯಲ್ಪಟ್ಟ ರಂಧ್ರದಲ್ಲಿ, ನೀರು ಹರಿದು, ಬೋಂಗಾ ಬಿದ್ದು, ಬ್ರೀಚ್ ಆಗಿ ಭಾರಿ ಪ್ರಮಾಣದಲ್ಲಿ ನೀರು ಹೊರ ಹೋಗುತ್ತಿರುವುದನ್ನು ತಡೆಯುವುದಕ್ಕಾಗಿ, ಕಾಲುವೆಯು ಕೊಚ್ಚಿಕೊಂಡು ಹೋದ ಭಾಗದ ದುರಸ್ಥಿ ಕಾಮಗಾರಿಯನ್ನು **"ತುರ್ತು ಕಾಮಗಾರಿ"** ಎಂದು ಘೋಷಿಸಿ, ಇದನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಸೆಕ್ಷನ್ 4(ಎ) ಅಡಿಯಲ್ಲಿ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿದೆ.

**PR-509**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಶ್ರೀನಿವಾಸುಲು,**
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 103 ಎಂಟಿಪಿ 2014, ಬೆಂಗಳೂರು, ದಿನಾಂಕ: 06-06-2015.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಕಲಂ 4(ಎ) ಅಡಿಯಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಪಿಡಬ್ಲ್ಯೂಡಿ 381 ಆಕೋ-3/06, ದಿನಾಂಕ:10.11.2006ರಲ್ಲಿ ನೀಡಿರುವ ಸ್ಪಷ್ಟೀಕರಣದ ಅನ್ವಯ, ನಂ.2, ಕಾಲುವೆ ಉಪ ವಿಭಾಗ, ಕಾರಟಗಿ, ಕೊಪ್ಪಳ ಜಿಲ್ಲೆ ಇದರ ವ್ಯಾಪ್ತಿಯಲ್ಲಿ, ತುಂಗಭದ್ರಾ ಎಡದಂಡೆ ಮುಖ್ಯ ಕಾಲುವೆ ಅಡಿಯಲ್ಲಿ, ಮೈಲ್ 40 (ಕಿ.ಮೀ.64)ರಲ್ಲಿ ಸರಪಳಿ 2125 ರಿಂದ ಸರಪಳಿ 2126 ರವರೆಗೆ ಹಾಗೂ ಸರಪಳಿ 2127ರ ಅಕ್ವಡಕ್ಟ್ ಮೇಲ್ಭಾಗದ ಬಲಬದಿ ಹಾಗೂ ಎಡಬದಿಯಲ್ಲಿ ಪೈಪಿಂಗ್ ಉಂಟಾಗಿರುವುದನ್ನು **"ತುರ್ತು ಕಾಮಗಾರಿ"** ಎಂದು ಘೋಷಿಸಿ, ಇದನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, 1999ರ ಸೆಕ್ಷನ್ 4(ಎ) ಅಡಿಯಲ್ಲಿ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿದೆ.

**PR-510**
**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಶ್ರೀನಿವಾಸುಲು,**
ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-1),
ಜಲ ಸಂಪನ್ಮೂಲ ಇಲಾಖೆ.

## ಜಲ ಸಂಪನ್ಮೂಲ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಜಸಂಇ 17 ಎಂಟಿಪಿ 2015, ಬೆಂಗಳೂರು, ದಿನಾಂಕ: 27-11-2015.**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ, '1999ರ ಕಲಂ 4(ಎ) ಅಡಿಯಲ್ಲಿ ನೀಡಲಾಗಿರುವ ಅಧಿಕಾರದನ್ವಯ ಹಾಗೂ ಸುತ್ತೋಲೆ ಸಂಖ್ಯೆ:ಪಿಡಬ್ಲ್ಯೂಡಿ 381 ಆಕೋ-3/06, ದಿನಾಂಕ:10.11.2006ರಲ್ಲಿ ನೀಡಿರುವ ಸ್ಪಷ್ಟೀಕರಣದ ಅನ್ವಯ, ನಂ.1, ತುಂಗಭದ್ರಾ ಜಲಾಶಯದ ವಿಭಾಗ, ಮುನಿರಾಬಾದ್ ಇದರ ವ್ಯಾಪ್ತಿಯಲ್ಲಿ, ಬಸವಣ್ಣ ಕಾಲುವೆ ಕಿ.ಮೀ.5.30 ರಲ್ಲಿನ ಸುರಂಗ ಮಾರ್ಗದಲ್ಲಿ ತಡೆ ಉಂಟಾಗಿ, ಕಿ.ಮೀ.3.00 ರಿಂದ ಕಿ.ಮೀ. 6.80ರ ಮಧ್ಯದಲ್ಲಿರುವ ಸುರಂಗ ಕಾಲುವೆ ಮತ್ತು ಸೇತುವೆಗಳ ಭಾಗದಲ್ಲಿ ತುರ್ತು ದುರಸ್ಥಿ ಕಾಮಗಾರಿಯನ್ನು ಹಾಗೂ ನಂ.2, ಕಾಲುವೆ ವಿಭಾಗ, ವಡ್ಡರಹಟ್ಟಿ, ಕೊಪ್ಪಳ ಜಿಲ್ಲೆ ಇದರ ವ್ಯಾಪ್ತಿಯಲ್ಲಿ, ಹಳೆಯದಾದ ವಿಜಯನಗರ ಕಾಲುವೆ ಹಾಗೂ ತುಂಗಭದ್ರಾ ಎಡದಂಡೆ ಕಾಲುವೆ ಉಪ ಕಾಲುವೆಗಳಲ್ಲಿ ಲೈನಿಂಗ್ ಮಾಡದ ಭಾಗದಲ್ಲಿ ಕಾಲುವೆ ತುಂಬಿ ಎಸ್.ಆರ್ ಮತ್ತು ಐ.ಪಿ.ಮೂಲಕ ನೀರು ಹರಿದು ಉಂಟಾದ ಕೊರತೆಯನ್ನು ನಿಭಾಯಿಸಲು ಕೈಗೊಂಡ ಕಾಮಗಾರಿಯನ್ನು **"ತುರ್ತು ಕಾಮಗಾರಿ"** ಎಂದು ಘೋಷಿಸಿ, ಇದನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999ರ ಸೆಕ್ಷನ್ 4(ಎ) ಅಡಿಯಲ್ಲಿ ವಿನಾಯಿತಿ ನೀಡಿ ಅಧಿಸೂಚನೆ ಹೊರಡಿಸಲಾಗಿದೆ.

**PR-511**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಶ್ರೀನಿವಾಸುಲು,**

ಸರ್ಕಾರದ ಅಧೀನ ಕಾರ್ಯದರ್ಶಿ(ತಾಂತ್ರಿಕ-1),

ಜಲ ಸಂಪನ್ಮೂಲ ಇಲಾಖೆ.

## ಇಂಧನ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಇಎನ್ 72 ಸಮನ್ವಯ 2016, ಬೆಂಗಳೂರು, ದಿನಾಂಕ: 07-04-2016.**

ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ (ಕೆ.ಆರ್.ಇ.ಡಿ.ಎಲ್) ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೋಷನ್‌ನ ಆರ್ಟಿಕಲ್ 51 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ (ಕೆ.ಆರ್.ಇ.ಡಿ.ಎಲ್) ಬೆಂಗಳೂರು ಇದರ ನಿರ್ದೇಶಕ ಮಂಡಳಿಗೆ. ಈ ಕೆಳಕಂಡಂತೆ ಅಧಿಕಾರಿ/ಅಧಿಕಾರೇತರರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿರ್ದೇಶಕ ಮಂಡಳಿಯನ್ನು ಪುನರ್ ರಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಶ್ರೀ ಶಶಿಕುಮಾರ್ | ಅಧ್ಯಕ್ಷರು |
| 2 | ಶ್ರೀ ಜಿ.ವಿ. ಬಲರಾಂ. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು | ನಿರ್ದೇಶಕರು |
| 3 | ಶ್ರೀ ಪಿ.ರವಿಕುಮಾರ್, ಭಾ.ಆ.ಸೇ, ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ | ನಿರ್ದೇಶಕರು |
| 4 | ಶ್ರೀ ಪಂಕಜ್ ಕುಮಾರ್ ಪಾಂಡೆ, ಭಾ.ಆ.ಸೇ, ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು | ನಿರ್ದೇಶಕರು |
| 5 | ಶ್ರೀ ಕೃಷ್ಣ ಮೂರ್ತಿ ಎಂ.ಎ ಕೃಷ್ಣರಾಜಪೇಟೆ (ಕೆ.ಆರ್.ಪೇಟ್) ತಾಲ್ಲೂಕು, ಮಂಡ್ಯ ಜಿಲ್ಲೆ. | ನಿರ್ದೇಶಕರು |
| 6 | ಶ್ರೀ ಬದರ್ ಖಾನ್, ಮನೆ ನಂ. 17, 1ನೇ ಮಹಡಿ, ಆಸ್ಟೀನ್ ಟೌನ್, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ | ನಿರ್ದೇಶಕರು |
| 7 | ಶ್ರೀಮತಿ ಕೆ.ವನಜ ಕೋಂ ಶ್ರೀ ಕೆಂಪೇರೇಗೌಡ, ಮೈಸೂರು ತಾಲ್ಲೂಕು ಮೈಸೂರು ಜಿಲ್ಲೆ. | ನಿರ್ದೇಶಕರು |

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 8 | ಶ್ರೀ ಚಿಕ್ಕವೆಂಕಟಯ್ಯ, ಹೆಬ್ಬೂರು ಅಂಚೆ, ತುಮಕೂರು ತಾಲ್ಲೂಕು, ತುಮಕೂರು ಜಿಲ್ಲೆ | ನಿರ್ದೇಶಕರು |
| 9 | ಶ್ರೀ ಬಾಬುರಾವ್ ತುಗಾಂವ ಬಿನ್ ಶ್ರೀ ತುಳಜಪ್ಪ,<br>ಮನೆ ನಂ. 19/2/33, ಎಲ್.ಐ.ಸಿ. ಕಾಲೋನಿ, ನೌಬಾದ್ ರಸ್ತೆ, ಬೀದರ್ ತಾಲ್ಲೂಕು, ಬೀದರ್ ಜಿಲ್ಲೆ. | ನಿರ್ದೇಶಕರು |
| 10 | ಶ್ರೀ ರಮೇಶ್ ಡಿ.ಎನ್.,<br>ಮನೆ ನಂ.542, 9ನೇ ಮೈನ್, ಎಂ.ಸಿ. ಲೇಔಟ್, ಬೆಂಗಳೂರು, ಬೆಂಗಳೂರು ನಗರ. | ನಿರ್ದೇಶಕರು |
| 11 | ಶ್ರೀ ದ್ಯಾಮಣ್ಣ ಸವದತ್ತಿ,<br>ದಂಡಾಪುರ, ನರಗುಂದ ತಾಲ್ಲೂಕು, ಗದಗ ಜಿಲ್ಲೆ | ನಿರ್ದೇಶಕರು |
| 12 | ಶ್ರೀ ಸಿದ್ದರಾಮೇಗೌಡ,<br>ಚಿನ್ನಬಳ್ಳಿ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. | ನಿರ್ದೇಶಕರು |

PR-548

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಶ್ವನಾಥ ಪಿ. ಹಿರೇಮಠ,**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

## ಇಂಧನ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಇಎನ್ 76 ಸಮನ್ವಯ 2016, ಬೆಂಗಳೂರು, ದಿನಾಂಕ: 07-04-2016.**

ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ ಇದರ ಮನೋರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೋಷನ್‌ನ ಆರ್ಟಿಕಲ್ 74 (ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು ಇದರ ನಿರ್ದೇಶಕ ಮಂಡಳಿಗೆ ಈ ಕೆಳಕಂಡಂತೆ ಅಧಿಕಾರಿ/ಅಧಿಕಾರೇತರರನ್ನು ನೇಮಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶವರೆಗೆ ನಿರ್ದೇಶಕ ಮಂಡಳಿಯನ್ನು ಪುನರ್ ರಚಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 1 | ಶ್ರೀ ಪಿ.ರವಿಕುಮಾರ್, ಭಾ.ಆ.ಸೇ,<br>ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ, ಇಂಧನ ಇಲಾಖೆ. | ಅಧ್ಯಕ್ಷರು |
| 2 | ಶ್ರೀ ಪಂಕಜ್ ಕುಮಾರ್ ಪಾಂಡೆ, ಭಾ.ಆ.ಸೇ.<br>ವ್ಯವಸ್ಥಾಪಕ ನಿರ್ದೇಶಕರು, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು | ನಿರ್ದೇಶಕರು |
| 3 | ಶ್ರೀ ಹೆಚ್. ನಾಗೇಶ್, ನಿರ್ದೇಶಕರು (ತಾಂ),<br>ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು. | ನಿರ್ದೇಶಕರು |
| 4 | ಶ್ರೀ ಗುರು ಪ್ರಸಾದ್, ನಿರ್ದೇಶಕರು (ಹಣಕಾಸು),<br>ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಬೆಂಗಳೂರು | ನಿರ್ದೇಶಕರು |
| 5 | ಶ್ರೀ ಗಂಗಾಧರ ಮೂರ್ತಿ ಬಿನ್ ಶ್ರೀ ಜಯರಾಮಯ್ಯ,<br>ನಂ. 583, 3ನೇ ಮುಖ್ಯ ರಸ್ತೆ, ಮತ್ತೀಕೆರೆ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ. | ನಿರ್ದೇಶಕರು |

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ಪದನಾಮ |
|---|---|---|
| 6 | ಶ್ರೀ ಮೊಹಮದ್ ಜುಕುಲ್ಲಾ, ಬಿನ್ ಶ್ರೀ ಅಬ್ದುಲ್ ಜಾಫರ್,<br>ನಂ. 12/2, 2ನೇ ಕ್ರಾಸ್, ಗೋಪಾಲಪುರ, ಮಾಗಡಿ ರಸ್ತೆ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ. | ನಿರ್ದೇಶಕರು |
| 7 | ಶ್ರೀ ವೆಂಕಟೇಶ್ ಟಿ.<br>ನಂ. 1853, 11ನೇ ಮೈನ್, 33ನೇ ಕ್ರಾಸ್, ಬನಶಂಕರಿ 2ನೇ ಹಂತ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ. | ನಿರ್ದೇಶಕರು |
| 8 | ಶ್ರೀ ಎಂ. ವೆಂಕಟೇಶ್ ಬಿನ್ ಶ್ರೀ ಮುನೀರಪ್ಪ<br>ಮನೆ ನಂ.19, ಆನೇಪಾಳ್ಯ ಮುಖ್ಯ ರಸ್ತೆ, ಆಡಗೋಡಿ ಅಂಚೆ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ | ನಿರ್ದೇಶಕರು |
| 9 | ಶ್ರೀ ನರಸಿಂಗ ರಾವ್,<br>ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ | ನಿರ್ದೇಶಕರು |
| 10 | ಶ್ರೀ ಮೊದಲೈ ಮುತ್ತು ಬಿನ್ ಶ್ರೀ ಅಂಥೋನಿ<br>ಕೆ.ಜಿ.ಎಫ್ ನಗರ, ಕೆ.ಜಿ.ಎಫ್, ಕೋಲಾರ ತಾಲ್ಲೂಕು, ಕೋಲಾರ ಜಿಲ್ಲೆ | ನಿರ್ದೇಶಕರು |
| 11 | ಶ್ರೀ ಬಿ.ಎಸ್. ವಸಂತ್ ಕುಮಾರ್<br>ಮನೆ ನಂ. 97, 2ನೇ ಮೈನ್, 2ನೇ ಕ್ರಾಸ್, ವಿಜಯನಗರ, ಬೆಂಗಳೂರು, ಬೆಂಗಳೂರು ನಗರ ಜಿಲ್ಲೆ. | ನಿರ್ದೇಶಕರು |
| 12 | ಶ್ರೀ ಜಯರಾಮ್,<br>ಮಾಗಡಿ ತಾಲ್ಲೂಕು, ರಾಮನಗರ ಜಿಲ್ಲೆ. | ನಿರ್ದೇಶಕರು |

PR-549

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿಶ್ವನಾಥ ಪಿ. ಹಿರೇಮಠ,**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ:ಕಂಇ 28 ಆರ್‌ಇಹೆಚ್ 2016, ಬೆಂಗಳೂರು, ದಿನಾಂಕ: 18-06-2016.**

ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದ ಅಧಿನಿಯಮ, 2009 ರ ಅಧ್ಯಾಯ-1 ಪ್ರಕರಣ 2(ಸಿ)ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಇದೇ ಅಧಿನಿಯಮದ ಪ್ರಕರಣ 2(ಜಿ) ಖಂಡದ ಅನುಸೂಚಿಯಲ್ಲಿ ಉಲ್ಲೇಖಿಸಿರುವ ಪರಂಪರೆಯ ತಾಣಗಳೂ ಮತ್ತು ಸ್ಮಾರಕಗಳೊಂದಿಗೆ ಐತಿಹಾಸಿಕ, ಸಾಂಪ್ರದಾಯಿಕ ಮತ್ತು ಪಾರಂಪರಿಕ ಹಿನ್ನೆಲೆಯುಳ್ಳ ಶಿಗ್ಗಾಂವ ತಾಲ್ಲೂಕಿನ ಗುಡ್ಡದಚನ್ನಾಪುರ ಗ್ರಾಮವನ್ನು ಅಭಿವೃದ್ಧಿ ದೃಷ್ಟಿಯಿಂದ ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪ್ರಾಧಿಕಾರದ ವ್ಯಾಪ್ತಿಗೆ ಸೇರ್ಪಡೆಗೊಳಿಸಿದೆ.

PR-550

SC-100

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಹಾಲಕ್ಷ್ಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ-1(ಪ್ರ),

ಕಂದಾಯ ಇಲಾಖೆ (ಮು&ಮು).

## ವಸತಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ವಇ 59 ಕೊಮಂಇ 2016, ಬೆಂಗಳೂರು, ದಿನಾಂಕ: 30-06-2016.**

ಕರ್ನಾಟಕ ಕೊಳಚೆ ಪ್ರದೇಶಗಳ (ಅಭಿವೃದ್ಧಿ ಮತ್ತು ನಿರ್ಮೂಲನೆ) ಕಾಯ್ದೆ 1973ರ ಕಲಂ 34 ಉಪ ನಿಯಮ(2)(ಕೆ)ರನ್ವಯ ಕರ್ನಾಟಕ ಕೊಳೆಗೇರಿ ಅಭಿವೃದ್ಧಿ ಮಂಡಳಿಗೆ 5 ಜನರನ್ನು ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಿ ನೇಮಕ ಮಾಡಿರುವ ಇದೇ ಸಮಸಂಖ್ಯೆ ದಿನಾಂಕ:07-04-2016ರ ಅಧಿಸೂಚನೆಯ ಕ್ರಮ ಸಂಖ್ಯೆ:01ರಲ್ಲಿರುವ ಸದಸ್ಯರ ಹೆಸರು ಮತ್ತು ವಿಳಾಸವನ್ನು ಈ ಮುಂದಿನಂತೆ ತಿದ್ದಿ ಓದಿಕೊಳ್ಳುವುದು.

| ಕ್ರ. ಸಂ. | ಸದಸ್ಯರ ಹೆಸರು | ವಿಳಾಸ |
|---|---|---|
| 01 | ಶ್ರೀ ಶಖೀಲ್ ಅತ್ತಾರ | ಪ್ಲಾಟ್ ನಂ.9, 2ನೇ ಮೈನ್, 1ನೇ ಕ್ರಾಸ್, ಸದಾಶಿವ ನಗರ, ಬೆಳಗಾವಿ ತಾಲ್ಲೂಕು, ಬೆಳಗಾವಿ ಜಿಲ್ಲೆ. |

**PR-551**

**SC-50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಮೀರ್ ಮಡಿಮನ್,**

ಸರ್ಕಾರದ ಅಧೀನ ಕಾರ್ಯದರ್ಶಿ–2,

ವಸತಿ ಇಲಾಖೆ.

## PERSONNEL AND ADMINISTRATIVE REFORMS SECRETARIAT

### NOTIFICATION

**No: DPAR 90 SRC 2014, BENGALURU DATED:13.05.2016.**

Whereas the draft of the following rules further to amend the Karnataka Civil Services (Conduct) Rules, 1966, was published as required by Clause (a), Sub-Section (2) of Section 3 of the Karnataka State Civil Services Act, 1978 (Karnataka Act 14 of 1990) in Notification No.DPAR 90 SRC 2014, dated: 03.03.2016, in part IV-A (No.347) in Special Gazette of the Karnataka Gazette dated:03.03.2016 inviting objections and suggestions from all persons likely to be affected thereby within fifteen days from the date of its Publication in the official Gazette.

Whereas, the said Gazette was made available to the public on 03.03.2016;

And whereas, no objections, and suggestions have been received in this behalf by the State Government;

Now, therefore, in exercise of the powers conferred by Sub-Sections(1) of Section 3 read with Sections 8 of the Karnataka State Civil Services Act, 1978 (Karnataka Act 14 of 1990) the Government of Karnataka hereby makes the following rules, namely:-

**RULES**

1. **Title and Commencement** ;- (1) These rules may be called the Karnataka Civil Services (Conduct) (Amendment) Rules, 2015.

   (2) They shall come into force from the date of their publication in the Offical Gazette.

2. **Amendment of Rule 23**;- In the Karnataka Civil Services (Conduct) Rules, 1996, in Rule 23, in sub-rule (1), after clause (d) Note-I Shall be omitted.

By Order and in the name of the Governor of Karnataka,

**GAYATHRI M.R**

Under Secretary to Government

Department of Personal

and Administrative Reforms (Service Rules-1).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 90 ಸೇನಿಸಿ 2014, ಬೆಂಗಳೂರು, ದಿನಾಂಕ: 13–05–2016.**

ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966 ಇದನ್ನು ಮತ್ತಷ್ಟು ತಿದ್ದುಪಡಿ ಮಾಡುವುದಕ್ಕೆ ದಿನಾಂಕ:03.03.2016ರ ಅಧಿಸೂಚನೆ ಸಂಖ್ಯೆ: ಸಿಆಸುಇ 90 ಸೇನಿಸಿ 2014ರಲ್ಲಿ ಪ್ರಕಟಿಸಿರುವ ಈ ಮುಂದಿನ ನಿಯಮಗಳ ಕರಡನ್ನು ಅಧಿಕೃತ ರಾಜ್ಯ ಪತ್ರದಲ್ಲಿ ಇದರ ಪ್ರಕಟಣೆಯ ದಿನಾಂಕದಿಂದ 15 ದಿನಗಳೊಳಗಾಗಿ ಅದರಿಂದ ಭಾಧಿತರಾಗುವ ಸಂಭವವಿರುವ ಎಲ್ಲಾ ವ್ಯಕ್ತಿಗಳಿಂದ ಆಕ್ಷೇಪಣೆ ಮತ್ತು ಸಲಹೆಗಳನ್ನು ಆಹ್ವಾನಿಸಿ ದಿನಾಂಕ:03.03.2016ರ ಕರ್ನಾಟಕ ರಾಜ್ಯಪತ್ರದ ವಿಶೇಷ ರಾಜ್ಯಪತ್ರಿಕೆಯ ಭಾಗ–IV-A ಸಂಖ್ಯೆ :347)ರಲ್ಲಿ ಕರ್ನಾಟಕ ರಾಜ್ಯ ನಾಗರಿಕ ಸೇವೆಗಳ ಅಧಿನಿಯಮ., 1978 (1990ರ ಕರ್ನಾಟಕ ಅಧಿನಿಯಮ 14)ರ 3ನೇ ಪ್ರಕರಣದ (2)ನೇ ಉಪಪ್ರಕರಣದ (ಎ) ಖಂಡದ ಮೂಲಕ ಅಗತ್ಯಪಡಿಸಲಾದಂತೆ ಪ್ರಕಟಿಸಲಾಗಿರುವುದರಿಂದ;

ಸದರಿ ರಾಜ್ಯಪತ್ರವನ್ನು ದಿನಾಂಕ: 03.03.2016ರಂದು ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿರುವುದರಿಂದ;

ಮತ್ತು ಸದರಿ ಕರಡಿನ ಬಗ್ಗೆ ಯಾವುದೇ ಆಕ್ಷೇಪಣೆ ಮತ್ತು ಸಲಹೆಗಳು ಸ್ವೀಕೃತವಾಗದಿರುವುದರಿಂದ;

ಈಗ ಕರ್ನಾಟಕ ರಾಜ್ಯ ನಾಗರಿಕ ಸೇವೆಗಳು ಅಧಿನಿಯಮ, 1978 (1990ರ ಕರ್ನಾಟಕ ಅಧಿನಿಯಮ 14)ರ 8ನೇ ಪ್ರಕರಣದೊಂದಿಗೆ ಓದಿಕೊಂಡು 3ನೇ ಪ್ರಕರಣದ (1)ನೇ ಉಪ ಪ್ರಕರಣದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಈ ಮೂಲಕ ಈ ಕೆಳಕಂಡಂತೆ ನಿಯಮಗಳನ್ನು ರಚಿಸುತ್ತದೆ ಎಂದರೆ:–

**ನಿಯಮಗಳು**

1. **ಹೆಸರು ಮತ್ತು ಪ್ರಾರಂಭ ;–** (1) ಈ ನಿಯಮಗಳನ್ನು ಕರ್ನಾಟಕ ನಾಗರಿಕ ಸೇವಾ (ನಡತೆ) (ತಿದ್ದುಪಡಿ) ನಿಯಮಗಳು, 2015 ಎಂದು ಕರೆಯತಕ್ಕದ್ದು.

(2) ಈ ನಿಯಮಗಳು ಅಧಿಕೃತ ರಾಜ್ಯಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

2. **ನಿಯಮ 23 ಕ್ಕೆ ತಿದ್ದುಪಡಿ ;–**ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966ರ ನಿಯಮ 23ರ ಉಪನಿಯಮ (1)ಡಿ ಅಡಿಯಲ್ಲಿನ ಟಿಪ್ಪಣಿ –Iನ್ನು ಕೈಬಿಡಲಾಗಿದೆ.

**PR-552**

**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಗಾಯತ್ರಿ ಎಂ.ಆರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
(ಸೇವಾ ನಿಯಮಗಳು–1).

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 61 ಬಿಎಂಆರ್ 2015, ಬೆಂಗಳೂರು, ದಿನಾಂಕ: 24–06–2016.**

ಸರ್ಕಾರದ ಅಧಿಸೂಚನೆ ಸಂಖ್ಯೆ:ನಅಇ 61 ಬಿಎಂಆರ್ 2015, ದಿನಾಂಕ: 08–05–2015 ರಲ್ಲಿ ಆನೇಕಲ್ ಯೋಜನಾ ಪ್ರಾಧಿಕಾರದ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದ್ದ ಶ್ರೀ ಎಂ. ವೆಂಕಟೇಶ್ ಬಿನ್ ಲೇಟ್ ಮುನಿರಾಮಯ್ಯ ರವರ ನಾಮನಿರ್ದೇಶನವನ್ನು ರದ್ದುಪಡಿಸಿ ಇವರ ಬದಲಾಗಿ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ, 1961ರ ಕಲಂ 4–ಸಿ(3)(iv) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ ಶ್ರೀ ಎಸ್.ಸಿ.ಶ್ರೀನಿವಾಸ್ ಬಿನ್ ಲೇಟ್ ಚಂದ್ರಶೇಖರಪ್ಪ, ನಂ.524, ರಾಜೀವ್‌ಗಾಂಧಿ ನಗರ, ಎಸ್.ಪಿ. ಲೇಔಟ್, ಜಿಗಣಿ, ಆನೇಕಲ್ ತಾಲ್ಲೂಕು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ, ಆನೇಕಲ್ ಯೋಜನಾ ಪ್ರಾಧಿಕಾರದ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

**PR-553**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ನರಸಿಂಹಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 16 ಯುಡಬ್ಲ್ಯೂಇ 2016, ಬೆಂಗಳೂರು, ದಿನಾಂಕ: 27–06–2016.**

ಸರ್ಕಾರದ ಆದೇಶ ಸಂಖ್ಯೆ: ನಅಇ 150 ಯುಎಂಎಸ್ 1996, ದಿನಾಂಕ: 23.11.1996 ಮತ್ತು ಸರ್ಕಾರದ ಆದೇಶ ಸಂಖ್ಯೆ ನಅಇ 150 ಯುಎಂಎಸ್ 1996ರ ದಿನಾಂಕ:28.01.1997ರ ಆದೇಶದಲ್ಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ 04 ಜನ ಅಧಿಕಾರಿಗಳ ನಾಮ ನಿರ್ದೇಶನವನ್ನು ರದ್ದುಪಡಿಸಿ ಆದೇಶಿಸಿದೆ.

**PR-554**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೈ.ಗೋಪಾಲ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.(ಮಂಡಳಿ)

## ನಗರಾಭಿವೃದ್ಧಿ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ನಅಇ 188 ಬೆಂಆಸೇ 2016, ಬೆಂಗಳೂರು, ದಿನಾಂಕ: 24–06–2016.**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಕಾಯ್ದೆ, 1976 ರ ಕಲಂ 3(3)(ಜ)ರ ಅಡಿಯಲ್ಲಿ ಈ ಕೆಳಕಂಡ ಶಾಸಕರುಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

1) ಶ್ರೀ ಬಿ.ಎ.ಬಸವರಾಜ್, ಶಾಸಕರು, ಕೆ.ಆರ್.ಪುರಂ, ವಿಧಾನಸಭಾ ಕ್ಷೇತ್ರ.

2) ಶ್ರೀ ಎಸ್.ಟಿ.ಸೋಮಶೇಖರ್, ಶಾಸಕರು, ಯಶವಂತರಪುರ ವಿಧಾನಸಭಾ ಕ್ಷೇತ್ರ.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ ಕಾಯ್ದೆ, 1976 ರ ಕಲಂ 3(3)(ಹೆಚ್)ರ ಅಡಿಯಲ್ಲಿ ಈ ಕೆಳಕಂಡ ಸದಸ್ಯರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಸದಸ್ಯರನ್ನಾಗಿ ನಾಮನಿರ್ದೇಶನ ಮಾಡಲಾಗಿದೆ.

1) ಶ್ರೀ ಜಗದೀಶ್ ರೆಡ್ಡಿ ಬಿನ್ ಲೇಟ್ ಎಸ್. ಗೋಪಾಲ್ ರೆಡ್ಡಿ,
ನಂ.2, 2ನೇ ಇ–ಮುಖ್ಯರಸ್ತೆ, ಕೋದಂಡರಾಮ ರೆಡ್ಡಿ ಗಾರ್ಡನ್,
ಒ.ಎಂ.ಬಿ.ಆರ್. ಬಡಾವಣೆ, ಬಾಣಸವಾಡಿ, ಬೆಂಗಳೂರು–560048.

**PR-555**

**SC-100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ನರಸಿಂಹಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಂಇ 68 ಮುಅಬಿ 2015, ಬೆಂಗಳೂರು, ದಿನಾಂಕ: 24–06–2016.**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ, (1997)ರ ಕಲಂ 23(ಇ)ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ, **"ಧಾರವಾಡ ಜಿಲ್ಲೆ, ಧಾರವಾಡ ತಾಲ್ಲೂಕು, ಕೆಲಗೇರಿ ಗ್ರಾಮದ ಶ್ರೀ ಕಲ್ಮೇಶ್ವರ ದೇವಾಲಯ"**ವನ್ನು ಮುಜರಾಯಿ ಇಲಾಖಾ ವ್ಯಾಪ್ತಿಯ ಅಧಿಸೂಚಿತ ಸಂಸ್ಥೆಗಳ ಪಟ್ಟಿಗೆ ಸೇರ್ಪಡಿಸಿ ಆದೇಶಿಸಿದೆ.

**PR-556**

**SC-25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಎಸ್. ನಾಗರತ್ನಮ್ಮ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ.(ಮುಜರಾಯಿ)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59